# ಎಲ್ಲರೂ ಓದಲೇಬೇಕು

## ಕಾದಂಬರಿಗಳು

| | | |
|---|---|---|
| ಜಾತಿದ್ವೇಷ | ಗೋವಿಂದ ಚುಳಕಿ | ಅಚ್ಚಿನಲ್ಲಿ |
| *ಹಳ್ಳಿಯ ಸಮಾಜ | ಶರಚ್ಚಂದ್ರ | ೦—೧೪—೦ |
| *ಬ್ರಾಹ್ಮಣರ ಹುಡುಗಿ | ,, | ೦—೧೨—೦ |
| *ಧೂಮಕೇತು | ಕೆ. ಶಂಕರಭಟ್ಟರು | ೦—೧೪—೦ |
| *ಇಜ್ಜೋಡು | ಪ್ರೊ. ಗೋಕಾಕ | ೧— ೮—೦ |
| *ರಾಜಯೋಗಿ | ಆನಂದಕಂದ | ೦—೧೪—೦ |
| *ಧರ್ಮಸೆರೆ | ಜಡಭರತ | ೦—೧೪—೦ |
| *ವಿಶ್ವಾಮಿತ್ರನ ಸೃಷ್ಟಿ | ಶ್ರೀರಂಗ | ೧—೨—೦ |
| *ಬಾಳುರಿ | ಪ್ರೊ. ಮುಗಳಿ | ೦—೧೨—೦ |
| ಸರಸಮ್ಮನ ಸಮಾಧಿ | ಕಾರಂತ | ೦—೧೨—೦ |
| ಎರಡು ಧ್ರುವ | ವಿ. ಸ. ಖಾಂಡೇಕರ | ೨—೦—೦ |

## ಕಥಾಸಂಗ್ರಹಗಳು

| | | | |
|---|---|---|---|
| *ರಂಗವಲ್ಲಿ | ಕನ್ನಡಿತಿಯರು | (ಸಾದಾ) | ೧—೦—೦ |
| | | (ಕ್ಯಾಲಿಕೊ) | ೧—೮—೦ |
| ತೆರೆಯ ಮರೆಯಲ್ಲಿ | ಕಾರಂತ | | ೦—೮—೦ |
| *ಪುಷ್ಪಮಾಲೆ | ಶ್ರೀಸ್ವಾಮಿ | | ೦—೧೨—೦ |
| *ಸೋಲೋ ಗೆಲುವೋ | ದೇವುಡು | | ೦—೧೨—೦ |
| *ಕುರಿಹಿಂಡು (ಸಚಿತ್ರ) | ಪರಶುರಾಮ | | ೧—೦—೦ |
| *ಜೀವನ | ಕೃಷ್ಣಕುಮಾರ | | ೦—೧೨—೦ |
| ವೀಣಾನಾದ | ಕೃ. ಹ. ಕುಲಕರ್ಣಿ | | ೦—೮—೦ |
| ಬೆಲ್ಲಾಹಿಟ್ಟು | ವಸಂತ | | ೦—೨—೦ |
| ಚಿಗುರು | ಮಿಸೆಸ್ ಬಿ. ಟಿ. ಜಿ. ಕೃಷ್ಣ | | ಅಚ್ಚಿನಲ್ಲಿ |

## ಕವಿತೆಗಳು

| | | | |
|---|---|---|---|
| ಗರಿ | ಅಂಬಿಕಾತನಯ ದತ್ತ | | ೧—೦—೦ |
| *ಮೂರ್ತಿ | ,, | | ೦—೮—೦ |
| *ಕಲೋಪಾಸಕ | ಪ್ರೊ. ಗೋಕಾಕ | (ಸಾದಾ) | ೧—೦—೦ |
| | | (ಕ್ಯಾಲಿಕೊ) | ೧—೪—೦ |
| *ಪಯಣ | ,, | | ೦—೧೨—೦ |

# ಮನೋಹರ ಗ್ರಂಥ ಭಾಂಡಾರ, ಧಾರವಾಡ

ಬಾಲಕಥಾವಲಿ : ೧

# ಬಲ್ಲಾಹಿಟ್ಟು

( ಶ್ರೀ. ಶಂ. ಬಾ. ಜೋಶಿಯವರ ಹರಕೆಯೊಂದಿಗೆ )

ಕತೆಗಾರ :

" ವಸಂತ "

ಮನೋಹರ ಗ್ರಂಥ ಭಾಂಡಾರ,
— ಧಾರವಾಡ —

ಮೇ ೧೯೩೮ ] * [ ೦-೨-೦

ಮುದ್ರಕರು :
ಶೇಷಗಿರಿರಾವ ಗೋವಿಂದರಾವ ಕುಲಕರ್ಣಿ
ಸಾಧನ ಮುದ್ರಣಾಲಯ
ಧಾರವಾಡ
೨೯–೩೮

**ಬಾಲಕಥಾವಲಿ : ೨**

"ವಸಂತ"ನ ಇನ್ನೊಂದು ಸಂಗ್ರಹ

# ಕರಿಗಡುಬು

**ಮನೋಹರ ಗ್ರಂಥ ಭಾಂಡಾರ**
**ಧಾರವಾಡ**

ಪ್ರಕಾಶಕರು :
ದತ್ತಾತ್ರೇಯ ಬಾಳಕೃಷ್ಣ ಕುಲಕರ್ಣಿ
ಮನೋಹರ ಗ್ರಂಥ ಭಾಂಡಾರ
ಧಾರವಾಡ

# ಹರಕೆ

ನಮ್ಮ ಸಾಹಿತ್ಯದಲ್ಲಿ ಇದೊಂದು ಅಪೂರ್ವ ಪುಸ್ತಕವು. ಏಕೆಂದರೆ ನಮ್ಮ ಕತೆಗಾರ ವಸಂತನ ವಯಸ್ಸು ೧೨ಕ್ಕೆ ಮಿಕ್ಕಿಲ್ಲ; ಇಷ್ಟು ಚಿಕ್ಕ ವಯಸ್ಸಿನ ಲೇಖಕನ ಕಥಾಸಂಗ್ರಹವು ಪುಸ್ತಕರೂಪದಿಂದ ಪ್ರಕಟವಾದುದು ಕನ್ನಡದಲ್ಲಿ ಇದೆ ಮೊದಲನೆಯದೆಂದು ತೋರುತ್ತದೆ.

ಚಿರಂಜೀವಿ ವಸಂತನು ವಿಕ್ಟೋರಿಯಾ ಹೈಸ್ಕೂಲಿನಲ್ಲಿ ಮೊದಲನೆಯ ಇಯತ್ತೆಯಲ್ಲಿರುವಾಗಲೆ (೧೯೩೬) ಇವನ ಲೇಖನಶಕ್ತಿಯು ನನಗೆ ಕಂಡುಬಂದಿತು. ವರ್ಗದೊಳಗೆ ಪ್ರಬಂಧದ ತಾಸಿನಲ್ಲಿ ಕತೆಗಳನ್ನು ಹೇಳಿ, ಅಥವಾ ಕೇಳಿದ ಕತೆಗಳನ್ನು ನೆನೆದು ಬರೆಯಲು ಪ್ರೋತ್ಸಾಹಿಸಿದರೆ ಹುಡುಗರಲ್ಲಿ ಸುಪ್ತವಾಗಿದ್ದುಕೊಂಡ (ಲೇಖನಕಲೆಗೆ ಪೋಷಕವಾದ) ಹಲವು ಶಕ್ತಿಗಳು ಸ್ಫುರಿಸುವುದಕ್ಕೆ ಆರಂಭವಾಗುವುದನ್ನು ನಾನು ಕಂಡಿದ್ದೇನೆ. ಇಂತಹ ಒಂದು ಒಳ್ಳೆಯ ಉದಾಹರಣವೆಂದರೆ ನಮ್ಮ ವಸಂತನದು.

ಬಾಯಿಂದ ಹೇಳುವ ಕಥೆಗಳ ರೀತಿಯೆ ಬೇರೆ. ಕೇಳಿದುದನ್ನು ಸೊಗಸಾಗಿ ಬರೆಯುವುದಕ್ಕೂ ಕೌಶಲಬೇಕು. ಕುಮಾರ ವಸಂತನು ತಾನು ಕೇಳಿದ ಕತೆಗಳನ್ನು ಸೊಗಸಾಗಿ ಬರೆಯಬಲ್ಲನಲ್ಲದೆ, ತಾನು ಕಂಡ ಪ್ರಸಂಗಗಳನ್ನು ತನ್ನ ವಯೋಮಾನದ ಶಕ್ತಿಗೆ ತಕ್ಕಂತೆ (ಅದಕ್ಕೂ ಹೆಚ್ಚಿನ ರೀತಿಯಲ್ಲಿಯೂ ಕೆಲ ಸಾರೆ) ಕಥೆಯಾಗುವಂತೆ ಬರೆಯುವುದನ್ನೂ ಕಂಡು ನಾನು ಹಿಗ್ಗಿದ್ದೇನೆ. ಇವನ ವಯಸ್ಸನ್ನೂ ಇಯತ್ತೆಯನ್ನೂ ನೆನೆದು, ಈ ಕಥೆಗಳನ್ನೋದಿದವರಿಗೆ ಇದರೊಳಗಿನ ಕಥಾಸರಣಿ, ಭಾಷೆಯ ಔಚಿತ್ಯ, ಶೈಲಿಯ ವೈಶಿಷ್ಟ್ಯಗಳನ್ನು ನೋಡಿ ಕೌತುಕವೆನಿಸದೆ ಇರಲಾರದು.

'ಬೆಲ್ಲಾಹಿಟ್ಟು' ಎಂದರೆ ಮಕ್ಕಳಿಗೆ ಬಹಳ ಮೆಚ್ಚಿಕೆ. ಉಂಡಿ, ಜಿಲ್ಲಬಿ ಮೊದಲಾದುವುಗಳನ್ನು ತಿಂದು ರುಚಿ ಬದಲಾದ ಹಿರಿಯರಿಗೆ 'ಬೆಲ್ಲಾಹಿಟ್ಟು' ಮನಸಿಗೆ ಅಷ್ಟು ಹಿಡಿಯಲಿಕ್ಕಿಲ್ಲ. ಆದರೂ 'ಬೆಲ್ಲಾ ಹಿಟ್ಟಿನ' ಸವಿಯನ್ನು ಬಲ್ಲವನೆ ಬಲ್ಲ. ಮಕ್ಕಳಿಗಂತೂ ಅದು ಸಿಕ್ಕದಿದ್ದರೆ ಮನಸಿಗೆ ಸೊಗಸದು.

ಮಕ್ಕಳು ತಮಗೆ ದೊರೆತ ಬೆಲ್ಲಾಹಿಟ್ಟನ್ನು ಯಾರೂ ಅರಿಯದಂತೆ ತಾವೆ ಗುಳುಮ್ಮನೆ ನುಂಗಿ ಸುಮ್ಮನಿದ್ದು ಬಿಡುವರು. ಆದರೆ ಇಂತಹ ಕೂಳಬಕ್ಕನು ನಮ್ಮ ವಸಂತನಲ್ಲ. ಅವನು ತನಗೆ ದೊರೆತ ಬೆಲ್ಲಾಹಿಟ್ಟಿ ನಲ್ಲಿ ತನ್ನ ಓರಗೆಯ ಇನ್ನುಳಿದವರಿಗೂ ಕೊಟ್ಟು, ಅದರ ಸವಿದೋರಲು ಮುಂದೆ ಬಂದಿದ್ದಾನೆ. ಅದನ್ನು ಇಸಿದುಕೊಳ್ಳಲು ಕನ್ನಡ ಕಂದರು ಬಿಡುಗೈಯಿಂದ ಮುಂದೆ ಬಂದು, ಚಿರಂಜೀವಿ ವಸಂತನಿಗೆ ಸಾಹಿತ್ಯ-ಬಲ್ಲವನಾಗಿ ಇನ್ನೂ ಬಗೆಬಗೆಯ ಸರಸ ಕೃತಿಗಳನ್ನು ರಚಿಸಲು ಹರಿಸ ಬೇಕು, ಹುರಿದುಂಬಿಸಬೇಕೆಂದು ಬಿನ್ನಹ.

**ಶಂ. ಬಾ. ಜೋಶಿ**

---

# ಪ್ರಕಾಶಕರ ಅರಿಕೆ

ಬಾಲಕರ ಕೋಮಲ ಮನವನ್ನರಿತುಕೊಂಡು ಹಿರಿಯರು ಬರೆ ದಂಥ ಬಾಲಸಾಹಿತ್ಯವು ನಮ್ಮಲ್ಲಿ ಇದುವರೆಗೆ ಬೆಳೆದುಬಂದಿದೆ. ಬಾಲ ರಂಜನಸಾಹಿತ್ಯವು ಬಹುವಿಧವಾಗಿ ಬೆಳೆಯತೊಡಗಿದೆ. ಅದರ ಫಲವಾಗಿ ಇಂದಿನ ಚಿಕ್ಕ ಚಿಕ್ಕ ಹುಡುಗರೂ ಸಹ ಬರೆಯಹತ್ತಿದ್ದಾರೆ. ಇಲ್ಲಿಯ 'ಕನ್ನಡ ಕಂದ'ನ ಉದಯದಿಂದ ಪ್ರೋತ್ಸಾಹಿತರಾಗಿ ಕೆಲವು ಚಿಕ್ಕ ವರು ಸಾಹಿತ್ಯಸೇವೆಯನ್ನು ಸಲ್ಲಿಸಲು ಮುಂದುವರಿದಿದ್ದಾರೆ. ಅಂಥವ ರಲ್ಲಿ ಚಿ। ವಸಂತನ ಈ ಮೊದಲ ಸಂಗ್ರಹವು "ಬೆಲ್ಲಾಹಿಟ್ಟು" ಈ ಬಾಲ ಕಥಾವಲಿಯಲ್ಲಿ ರೂಪುಗೊಂಡು ಬಂದಿದೆ. ಇದರಂತೆ ಇನ್ನೂ ಬಾಲ ಸಾಹಿತ್ಯವನ್ನು ನಾವು ಕಾಲಕಾಲಕ್ಕೆ ಪ್ರಕಟಿಸಬೇಕೆಂದಿರುವೆವು.

## ಏಕಾದಶಿ

ಬಂಡಾಯಕಾಲದ ಒಂದು ಮಧ್ಯಾಹ್ನ. ಉರು ಉರು ಉಗ್ರ ಉಗ್ಗರ. ಇಂಥ ವೇಳೆಯಲ್ಲಿ ನಾಲ್ಕುಮಂದಿ ಆಚಾರ್ಯರು ಮುಂಡರಗಿಯ ಹಾದಿಯನ್ನು ಹಿಡಿದು ಸಾಗಿದ್ದರು. ಸಂಜೆಯ ಸುಮಾರಿಗೆ ಅವರು ಮುಂಡರಗಿಯನ್ನು ಮುಟ್ಟಿದರು. ಮುಂಡರಗಿಯ ಮೊಂಡುಗೈ ಭೀಮರಾಯನು ಅವರನ್ನು ಬಹು ಆದರದಿಂದ ಬರಮಾಡಿಕೊಂಡನು. ರಾತ್ರಿಯಲ್ಲಿ ಭೀಮರಾಯನು ಅವರಿಗೆ "ಕೈಕಾಲು ತೊಳೆದುಕೊಳ್ಳಲು ಏಳಬೇಕು" ಎಂದು ಹೇಳಿದನು. ಅದಕ್ಕೆ ಆಚಾರ್ಯರು "ಏನು ಮಹಾರಾಯಾ, ಈ ದಿವಸ ಏಕಾದಶಿ! ಗೊತ್ತಿಲ್ಲವೇ? ನಾವು ನಿಶ್ಚಕ್ರ ನಿರಹಾರ" ಎಂದರು.

ಆರು ತಾಸು ರಾತ್ರಿಯಾದರೂ ಆಚಾರ್ಯರಿಗೆ ನಿದ್ದೆ ಬರಲೊಲ್ಲದು. ಹೊಟ್ಟೆಯ ಹಸಿವೆಯನ್ನು ತಾಳಲಾರದೆ ಎದ್ದು ಕುಳಿತರು. ಬಳಕೆಗಾಗಿ ನೀರನ್ನು ಇಡಿಸಿಕೊಂಡಿದ್ದರು. ಹಸಿಬಿಯಲ್ಲಿಯ ಪಾತೇಲಿಯನ್ನು ತೆಗೆದರು. ಅದೇ

ನೀರನ್ನು ಹಾಕಿ ಅಳ್ಳಿಟ್ಟು ಕಲಿಸಿದರು. ನಾಲ್ಕು ಉಂಡಿಗಳನ್ನು ಕಟ್ಟಿದರು.

ಆಚಾರ್ಯರನ್ನು ಪರೀಕ್ಷಿಸಬೇಕೆಂದು ಭೀಮರಾಯನು ಮೆಲ್ಲಗೆ ಅವರಿದ್ದಲ್ಲಿಗೆ ಹೋದನು; ಕೈಯನ್ನೊಚಾಚಿದನು. ಒಂದು ಉಂಡಿಯು ಅವನಿಗೆ ದೊರೆಕಿತು. ಆದರೆ ತಿನ್ನಲಿಲ್ಲ. ಎಲ್ಲರೂ ಅಳ್ಳಿಟ್ಟಿನ ಮುದ್ದಿಯನ್ನು ನುಂಗಹತ್ತಿದರು.

ಅವರಲ್ಲೊಬ್ಬನು "ನನಗರೀ ಭೀಮಾಚಾರು" ಎಂದು ಬಾಯಿಯಲ್ಲಿಯೇ ಮಾತಾಡಿದನು.

ಅದಕ್ಕೆ ಆಚಾರ್ಯರು "ನಾಲ್ಕು ಕಟ್ಟಿದ್ದೆ-ತಲೆಗೊಂದರಂತೆ. ಮೂವರಿಗೂ ಆಗಲೇ ಕೊಟ್ಟಿರುವೆನಲ್ಲ! ಯಾಕೆ ಇನ್ನೊಂದು ಬೇಕೇನು?" ಎಂದರು.

ಅವನು "ನನಗೆ ಕೊಟ್ಟೇ ಇಲ್ಲ. ಅಂದಲ್ಲೇ ನಿಮಗೆ ಎರಡು" ಎಂದಂದ.

ಆಚಾರ್ಯರು "ಆಗಲೇ ಕೊಟ್ಟಿದ್ದೇನೆ. ಸುಳ್ಳು ಹೇಳತೀಯಾ ಏಕಾದಶೀ ದಿನ" ಎಂದು ಗೊಗ್ಗರ ದನಿಯಲ್ಲಿ ಮಾತನಾಡಿದರು.

ಹೀಗೆ ಉತ್ತರಕ್ಕೆ ಉತ್ತರ ನಡೆಯಿತು. ಇದನ್ನು ನೋಡಿ ಭೀಮರಾಯನು "ಇಲ್ಲಿದೆ ತೆಗೆದುಕೊಳ್ಳಿರಿ" ಎಂದು ಹೇಳಿ ದೀಪವನ್ನು ಹಚ್ಚಿದನು.

ಆಚಾರ್ಯರ ಬಾಯಲ್ಲಿಯ ಮುದ್ದೆಯು ಕೆಳಗೆ ಬಿದ್ದಿತು.

" ಅಹಹ! ನೀ....ರು....ಹಾ....ರ....ವೇ" ಎಂದು ನಗುತ್ತಾ ಭೀಮರಾಯನು ಮಲಗಲು ತನ್ನ ಸ್ಥಳಕ್ಕೆ ಹೋದನು.

ಬೆಳಗೆದ್ದು ನೋಡಲು ಆಚಾರ್ಯರು ಯಾವಾಗ ಎದ್ದು **ಹೋ**ಗಿದ್ದರೋ ತಿಳಿಯಲಿಲ್ಲ.



## ಉಡಾಳ ರಂಗ

ರಂಗ ಬಹಳ ಕೆಟ್ಟ ಹುಡುಗ. ನಮ್ಮ ಊರಲ್ಲಿ ಅವನ ಉಡಾಳತನಕ್ಕೆ ಎಲ್ಲರೂ ಬೇಸತ್ತಿದ್ದರು. ಅವನ ಕಿಡಿಗೇಡಿತನವನ್ನು ಬಿಡಿಸಬೇಕೆಂದು ಮಾಸ್ತರರು ಅವನನ್ನು ಹೊಡೆಯುತ್ತಿದ್ದರು. ಆದ್ದರಿಂದ ಮಾಸ್ತರರನ್ನು ಕಂಡರೆ ಅವನಿಗೆ ಆಗುತ್ತಿದ್ದಿಲ್ಲ.

ರಂಗನಿಗೀಗ ಎಂಟು ವರ್ಷ. ಇನ್ನೂ ಬಿಗ್‌ ಇಯತ್ತೆಯಲ್ಲಿದ್ದ. ಇನ್ನೂ " ಯ ರ ಲ ವ ಶ ಷ " ಕಲಿಯುತ್ತಿದ್ದ. ಏಕೆಂದರೆ ಅವನ ಮನಸು ಪುಂಡಾಟಿಕೆಯಲ್ಲಿತ್ತೇ ಹೊರತು ಅಭ್ಯಾಸದಲ್ಲಿದ್ದಿಲ್ಲ.

ಮಾಸ್ತರರು "ಯ ರ ಲ ವ ಶ ಷ" ಎಂದು ಹೇಳಿ ಕೊಡುತ್ತಿದ್ದರು. ರಂಗನು "ಯಾರಲೆ ಅವ ಶೇಷ" ಎಂದು ಅನ್ನುತ್ತಿದ್ದ. ಯಾಕೆಂದರೆ ಮಾಸ್ತರರ ಹೆಸರು "ಶೇಷಪ್ಪ." ಓದುವದರಲ್ಲಿಯೆ ಬಯ್ದು ಸಿಟ್ಟು ತೀರಿಸಿಕೊಳ್ಳುತ್ತಿದ್ದ. ಮಾಸ್ತರರು ಇದನ್ನು ತಿಳಿದು ರಂಗನನ್ನು ಮೈಹುಳಿ ಥಳಿಸಿದರು.

ಒಂದು ದಿನ ರಂಗನು ಒಂದೆರಡು ಬೆಕ್ಕಿನ ಮರಿಗಳನ್ನು ತಂದು ಮಾಸ್ತರರು ಕೂಡ್ರುವ ಜಾಗೆಯ ಮೇಲೆ ಇದ್ದ ನಾಗೊಂದಿಯ ಮೇಲಿಟ್ಟು ಅದರ ಮೇಲೆ ಒಂದು ಸಣ್ಣ ಬುಟ್ಟಿಯನ್ನು ಡಬ್ಬು ಹಾಕಿದನು. ಬೆಕ್ಕಿನ ಮರಿಗಳಿಗೆ ಉಸಿರು ಸಿಕ್ಕಹಾಗಾಯ್ತು. ಅವು ಬುಟ್ಟಿಯಲ್ಲಿಯೆ ಒದ್ದಾಡ ಹತ್ತಿದವು. ಬುಟ್ಟಿ ಮಾಸ್ತರರ ತಲೆಗೆ ಟೊಪ್ಪಿಗೆಯಾಯಿತು. ಹುಡುಗರು ಬಿದ್ದು ಬಿದ್ದು ನಗಹತ್ತಿದರು. ಅವರ ನಗೆಯು ನಿಂತಿತು. ರಂಗನು ಬಿಕ್ಕಿ ಬಿಕ್ಕಿಸಿ ಅಳತೊಡಗಿದನು.



# ಕೆಟ್ಟ ಆಟ

ಒಂದು ಊರಲ್ಲಿ ಕೆಲವು ಚಿಕ್ಕ ಚಿಕ್ಕ ಮಕ್ಕಳು ಒಂದು ದಿವಸ ಗಣಪತಿಯ ಆಟವನ್ನು ಆಡಬೇಕೆಂದು ನಿಶ್ಚಯಿಸಿದರು. ಒಬ್ಬನು ಒಂದು ಸಣ್ಣ ಕೂಸನ್ನು ತಂದು ಗಣಪತಿಯನ್ನಾಗಿ ಮಾಡಿದನು. ಎಲ್ಲರೂ ಕೂಡಿ ಹೆಂಟೆ, ಹರಳು, ಮಣ್ಣು ಮುಂತಾದವುಗಳಿಂದ ಅಡಿಗೆ ಮಾಡಿ, ಆ ಕೂಸಿಗೆ ಆರತಿ, ನೈವೇದ್ಯ ಮಾಡಿದರು. ಹೀಗೆ ಐದು ಸಲ ಮಾಡಿ ಐದು ದಿವಸಗಳಾದವೆಂದರು. ಆ ಕೂಸನ್ನು ಒಯ್ದು ಬಾವಿಯ ಕಟ್ಟೆಯಮೇಲಿಟ್ಟು, ಹೆಂಟೆಯನ್ನು ತೆಂಗಿನಕಾಯನ್ನಾಗಿ ಮಾಡಿ ಆ ಕೂಸಿನ ಮುಂದೆ ಒಡೆದರು. ಒಂದು ಕಡ್ಡೀಪೆಟ್ಟಿಗೆಯನ್ನು ತಂದು ಹಗಲಪಂಜಾಗಿ ಮಾಡಿ ಅದರ ಮುಂದೆ ಕೆರೆದರು. ಆಗ ಕೂಸು ನಗುತ್ತಿತ್ತು. ಆಮೇಲೆ ಎಲ್ಲರೂ ಕೂಡಿ "ಗಣಪತಿ ಗಣಪತಿ ಮೋರಾಯಾ, ಪುಂಡೀಪಲ್ಯಾ ಸೋರಾಯಾ" ಎಂದು ಆ ಕೂಸನ್ನು ಬಾವಿಯಲ್ಲಿ ಹಾಕಿದರು. ಮನೆಗೆ ಬಂದರು. ತಾಯಿ ತಂದೆಗಳ ಮುಂದೆ ಗಣಪತಿ ಕಳಿಸಿಬಂದೆವೆಂದು ಸಂತೋಷದಿಂದ ಹೇಳಿದರು. ಅವರು ಗೊಳೋ ಎಂದು ಗೋಳಿಟ್ಟರು. ಅವರನ್ನು ಕಂಡು ಹುಡುಗರೂ ಅಳಹತ್ತಿದವು.



# ವಿಚಿತ್ರ ಗೊಂಬೆ

ಒಂದು ಊರಲ್ಲಿ ಒಬ್ಬ ಗೌಡನಿದ್ದನು. ಅವನ ಮನೆಯಲ್ಲಿ ಅವನು ಮತ್ತು ಅವನ ಹೆಂಡತಿ ಇಬ್ಬರೇ. ಮಕ್ಕಳಿರಲಿಲ್ಲ.

ಒಂದು ದಿನ ಗೌಡನು ಪರಊರಿಗೆ ಹೋಗಬೇಕಾಯ್ತು. ಆಗ ಅವನು ತನ್ನ ಹೆಂಡತಿಯನ್ನು ಕರೆದು " ಈಗ ನಾನು ಊರಿಗೆ ಹೋಗಲೇಬೇಕಾಗಿದೆ. ಈ ದಿವಸ ಬರುವದಿಲ್ಲ. ನಾಳೆ ಬರುವೆ. ನೀನು ಹೆದರುವಾಕೆಯೆಂದು ಒಂದು ಗೊಂಬೆಗೆ ಮಂತ್ರಹಾಕಿಸಿ ತಂದಿರುವೆ. ಕಳ್ಳರು ಬಂದರೆ ' ಗೋವಿಂದಾ ' ಎಂದರೆ ಅವರನ್ನು **ಹೊಡೆ**ದೋಡಿಸಿ ಬಿಡುವದು. ' ರಾಮ ' ಎಂದರೆ ಬಿಡುವದು." ಎಂದು ಹೇಳಿ ಹೊರಟುಹೋದನು.

ಅದೇ ರಾತ್ರಿ ಕಳ್ಳರು ಮನೆಗೆ ಕನ್ನ ಇಕ್ಕಿ ಒಳಗೆ ನುಗ್ಗಿದರು. ಆಗ ಗೌಡನ ಹೆಂಡತಿಗೆ ಎಚ್ಚರವಾಯಿತು. ಸ್ವಲ್ಪ ಹೆದರಿದಳು. ಕೂಡಲೇ ಗಂಡನು ಹೇಳಿದ ಮಾತುಗಳು ನೆನಪಿಗೆ ಬಂದು " ಗೋಪಿಂದಾ " ಎಂದಳು. ಕೂಡಲೇ ಆ ಗೊಂಬೆಯು ಅವರ ತಲೆ ತಲೆ ಕಟೆಯಹತ್ತಿತು. ಆಗ ಅವರು ಕಳವು ಮಾಡುವದನ್ನು ಬಿಟ್ಟು ಓಡಹತ್ತಿದರು. ಗೊಂಬೆಯೂ ಅವರ ಬೆನ್ನು ಬಿಡಲಿಲ್ಲ. ಅವರು ಓಡಿ ಓಡಿ ದಣಿದು ಒಂದು ಹಳ್ಳದಲ್ಲಿ ಉಸುಬಿ

ನಲ್ಲಿ ಹೋಗಿ ಬಿದ್ದರು. ಗೊಂಬೆಯು ಅಲ್ಲಿಯೂ ಹೋಗಿ ಅವರನ್ನು ಕಟೆಯುಹತ್ತಿತು. ಆಗ ಕಳ್ಳರು ವಿಚಾರಿಸಿದ್ದೇನಂದರೆ ಆ ಹೆಣ್ಣುಮಗಳು "ಗೋವಿಂದಾ" ಎಂದಕೂಡಲೆ ಗೊಂಬೆಯು ನಮ್ಮನ್ನು ಹೊಡೆಯಹತ್ತಿತು. ಇದರ ಹೆಸರು "ಗೋವಿಂದಾ" ಎಂದೇ ಇರಬೇಕೆಂದು "ಅಯ್ಯೋ ಗೋವಿಂದಾ ಬಿಡೋ ನಮ್ಮನ್ನು ಗೋವಿಂದಾ, ಗೋವಿಂದಾ" ಎಂದರು. ಗೊಂಬೆಯು ಮತ್ತಿಷ್ಟು ಅವರನ್ನು ತೆರಪಿಲ್ಲದೆ ಹೊಡೆಯಹತ್ತಿತು. ಅವರು ಎಷ್ಟು ಹೇಳಿಕೊಂಡರೂ ಅದಕ್ಕೆ ಕರುಣ ಹುಟ್ಟಲಿಲ್ಲ. ಕಡೆಗೆ ಅವರು ನಿರಾಶರಾಗಿ "ರಾಮ, ರಾಮ ನೀನೇ ನಮ್ಮನ್ನು ಕಾಪಾಡಪಾ" ಎಂದರು. ಕೂಡಲೇ ಗೊಂಬೆಯು ಅವರನ್ನು ಅಗಲಿ ತಿರುಗಿ ಗೌಡನ ಮನೆ ಸೇರಿತು. ಮರುದಿನ ಗಂಡ ಬಂದ. ಕೂಡಲೇ ಹೆಂಡತಿಯು "ಗೋವಿಂದ"ನ ಆಟವನ್ನು ನಗುನಗುತ್ತ ಹೇಳಿದಳು. ಅವನೂ ಬಿದ್ದು ಬಿದ್ದು ನಗಹತ್ತಿದ.



## ಐ ನನ್ನ ಹೂವೇ!

ರಾಘವೇಂದ್ರರಾಯರಿಗೆ ಕನ್ನಡದಲ್ಲಿ ಅಭಿರುಚಿ ಬಹಳ. ಅವರು ಆ ಊರಿಗೇ ಹಿರಿಯರಾಗಿದ್ದರು. ಆದರೆ ಅವರಿಗೆ ಮಕ್ಕಳು ಮಾತ್ರ ಇರಲಿಲ್ಲ. ಅವರಿಗೆ ಇದೊಂದು

ದೊಡ್ಡ ಚಿಂತೆ ಇತ್ತು. ಮುಪ್ಪಿನ ಕಾಲಕ್ಕೆ ಅದು ದೂರ ವಾಯಿತು.

ಮುದ್ದುಮುದ್ದಾದ ಒಂದು ಗಂಡು ಮಗು ಹುಟ್ಟಿದೆ. ಆ ಕೂಸಿಗೆ ಅವರು " ಸುಧಾಕರ " ಎಂದು ಹೆಸರಿಟ್ಟಿದ್ದರೂ, ರಾಘವೇಂದ್ರರಾಯರು ಮಮತೆಯಿಂದ " ಕನ್ನಡ ಕಂದ " ಎಂದು ಕರೆಯುವರು. ಅವರಿಗೆ ಈ ಹುಡುಗನು " ಕನ್ನಡ ಪಂಡಿತ " ನೆನಿಸಿಕೊಳ್ಳಬೇಕೆಂಬ ಬಲವಾದ ಆಶೆ.

ಬರಬರುತ್ತ ಮಗು ಬಿದಿಗೆಯ ಚಂದ್ರನಂತೆ ಬೆಳೆಯಿತು. ಎರಡು ವರ್ಷದ್ದಾಯಿತು. ಆಗ ಅದು ತಪ್ಪು ತಪ್ಪು ಹೆಜ್ಜೆಗಳನ್ನಿಡುತ್ತ, ಓಡಾಡುತ್ತಿತ್ತು. ಅದರ ಕಿಡಿಗೇಡಿ ಕೆಲಸಕ್ಕಂತೂ ಮಿತಿಯೇ ಇಲ್ಲ. ತನ್ನ ತೊದಲ್ನುಡಿಯಿಂದ ತಾಯಿ-ತಂದೆಗಳನ್ನು ಸಂತೋಷಗೊಳಿಸುತ್ತಿತ್ತು, ಆ ಮಗು.

ರಾಘವೇಂದ್ರರಾಯರಿಗೆ ಮತ್ತು ಅವರ ಹೆಂಡತಿಗೆ ದೇವರಲ್ಲಿ ಆಸಕ್ತಿ ಬಹಳ. ಅಂದು ನವರಾತ್ರಿ. ರಾಘವೇಂದ್ರರಾಯರು ದೇವರ ಮಾಲೆಗೋಸುಗ ಮುಂಜಾನೆ ಹೂವುಗಳನ್ನು ತಂದು ಆದೆ ತೊಳೆದ ಪರಾತದಲ್ಲಿ ಇಟ್ಟಿದ್ದರು. ತಾಯಿ ಅಲ್ಲಿಯೇ ತಂಬಿಗೆ ಥಾಲಿ ತಿಕ್ಕುತ್ತ ಕುಳಿತಿದ್ದಳು. ಪುಟ್ಟ " ಕನ್ನಡ ಕಂದ " ನೂ, ಅಲ್ಲಿಯೇ ತಾಯಿಯ ಹತ್ತರ ಇದ್ದನು. ಅವನಿಗೆ ಪರಾತದಲ್ಲಿಯ ಅಂದಚಂದದ

ಹೂವುಗಳು ಕಾಣಿಸಿದವು. ಆ "ಕಂದ" ನಿಗೆ ಆ ಹೂವುಗಳನ್ನು ತೆಗೆದುಕೊಳ್ಳಬೇಕೆಂದು ಆಶೆಯಾಯಿತು. ಕೂಡಲೇ ತನ್ನ ಪುಟ್ಟ ಪುಟ್ಟ ಕಾಲುಗಳಿಂದ ತಪ್ಪು ತಪ್ಪು ಹೆಜ್ಜೆಗಳನ್ನಿಡುತ್ತ ಆ ಪರಾತದ ಕಡೆಗೆ ಓಡಿದ. ಹೋದವನೇ ಆ ಪರಾತದಲ್ಲಿ ಕುಳಿತು ತನ್ನ ಪುಟ್ಟ ಪುಟ್ಟ ಕೈಗಳಿಂದ ಎಲ್ಲ




ಹೂವುಗಳನ್ನು ಸೂರೆಮಾಡಿಬಿಟ್ಟ. ಆಗ್ಗೆ ತಾಯಿ ಇದನ್ನು ನೋಡಿದಳು. 'ಕಂದ' ನು ಹೂವುಗಳನ್ನು ಸೂರೆ ಮಾಡುತ್ತ ಪರಾತದಲ್ಲಿ ಕುಳಿತಿದ್ದನು. ಕೂಡಲೇ "ಐ-ನನ್ನ-ಹೂವ" ಎನ್ನುತ್ತ ಆ ಹೂವುಗಳನ್ನು ಗೂಡಿಸಲಿಕ್ಕೆ ಓಡಿ ಬಂದಳು. ಆಗ "ಕನ್ನಡ ಕಂದ" ನು ತನ್ನ ಸವಿನುಡಿಯಿಂದ ತಾಯಿ ಅಂದಹಾಗೆ 'ಐ-ನನ್ನ-ಹೂವ' ಎಂದು ಅಣಕಿಸಿದನು.



# ಅಳಿಯನ ಹುಚ್ಚು

ಅಜ್ಜಿ ಮೊಮ್ಮಗನಿಗೆ " ನೀನು ಅತ್ತೆಯ ಮನೆಯಲ್ಲಿ ಬಹಳ ನಾಜೂಕದಿಂದ ಇರಬೇಕಪ್ಪಾ. ' ನಾಜೂಕ ' ಶಬ್ದ ವನ್ನು ಮರೆಯಬೇಡ" ಎಂದು ಹೇಳಿದಳು. ಮೊಮ್ಮಗನು ಅದರಂತೆಯೆ ನಡೆದ. " ದಾರಿಯಲ್ಲಿ ಅದು ಮರೆತರೆ ಏನು ಮಾಡಬೇಕು?" ಎಂದು ಮನಸ್ಸಿನಲ್ಲಿಯೇ ಯೋಚಿಸಿ ದನು. ' ಹಾ ' ನನಗೊಂದು ಉಪಾಯ ಹೊಳೆಯಿತು ಎಂದವನೇ " ನಾಜೂಕ, ನಾಜೂಕ " ಎನ್ನುತ್ತ ಹೊರಟ ಹಾದಿಯಲ್ಲಿ ಒಂದು ಹಳ್ಳಿ ಹತ್ತಿತು. ಅದರ ಪಕ್ಕದಲ್ಲಿಯೇ ಒಂದು ಹಳ್ಳ ಹರಿದಿದ್ದಿತು. ಅದರಲ್ಲಿ ಅಳಿಯನು ನೀರು ಕುಡಿಯಲಿಕ್ಕೆ ಇಳಿದ. ನೀರು ಬಾಯಿಯಲ್ಲಿ ಹಾಕಿದ ಕೂಡಲೇ "ನಾಜೂಕ" ಶಬ್ದವು ಮರೆತುಹೋಯಿತು ಪೆಚ್ಚನ ಹಾಗೆ ಒಂದೇಸವನೇ ಹುಡುಕಾಡಲಿಕ್ಕೆ ಹತ್ತಿದ ಆಗ ಆ ಹಳ್ಳಿಯಿಂದ ಒಬ್ಬ ಮುದುಕೆಯು ನೀರಿಗೋಸುಗ ಹಳ್ಳಕ್ಕೆ ಬಂದಳು. ಆಗ ಇವನನ್ನು ಕಂಡು " ಏನದು ತಮ್ಮಾ, ಹುಡುಕೋದು?" ಎಂದು ಕೇಳಿದಳು. " ಏನೋ ಕಳೆದು ಹೋಗಿದೆಯಮ್ಮಾ, ಹೆಸರೇ ಮರೆತುಹೋಯಿತು" ಎಂದು ಹೇಳಿದನು. " ಅಯ್ಯೋ, ನಾಜೂಕದಿಂದ ಇಟ್ಟು ಕೊಳ್ಳಬೇಕಿಲ್ಲೋ?" ಎಂದಳು ಮುದುಕಿ. ಅಳಿಯನಿಗೆ ಕಳೆದ ವಸ್ತು ಅನಾಯಾಸವಾಗಿ ಸಿಕ್ಕಿತು. " ಹಾ ಸಿಕ್ಕಿತು '

ಎಂದವನೇ ಮತ್ತೆ ಬಾಯಲ್ಲಿ ರಾಮನಾಮದಂತೆ ಜಪಿಸುತ್ತ ಹೊರಟ.

ಹಾದಿಯಲ್ಲಿ ಚಿಗರೇ ಬಲೆಗಾರರು ಚಿಗರಿಗೆ ಬಲೆ ಹಾಕಿದ್ದರು. ಪಾಪ ಅವರಿಗೆ ಇನ್ನೂವರೆಗೂ ಒಂದೂ ಚಿಗರೆ ಸಿಕ್ಕಿದ್ದಿಲ್ಲ. ಇವನು ಅಲ್ಲಿ ಹೋದವನೇ "ನಾಜೂಕ, ನಾಜೂಕ" ಎಂದು ಒದರಿ ಬಿಟ್ಟ. ಆಗ ಅದೇ ಒಂದೇ ಚಿಗರಿ ಬಲೆಯ ಸಮೀಪಕ್ಕೆ ಬಂದದ್ದು ಸಹ ಓಡಿ ಹೋಯಿತು. ಬಲೆಗಾರರು ಸಿಟ್ಟಿಗೆದ್ದು ಇವನನ್ನು ಬಡೆದರು. ಆಗ ಅಳಿಯನು "ಮತ್ತೇನೆನ್ನಬೇಕು?" ಎಂದು ಕೇಳಿದ. ಅವರು "ಒಂದರ ಹಿಂದೊಂದು ಚಿಗರಿ ಬಲೆಯೊಳಗೆ ಹೀಗೆಯೇ ಸಿಗಲಿ-ಎನ್ನು" ಎಂದರು. ಅಳಿಯನಿಗೆ ಇದು ಬಲು ದೊಡ್ಡ ವಾಕ್ಯವಾಯಿತು. ಅವನು ಅದನ್ನು ಸಣ್ಣದು ಮಾಡಿ "ಒಂದರ ಹಿಂದೊಂದು ಹೀಗೆಯೇ ಸಿಗಲಿ" ಎಂದು ಎನ್ನುತ್ತಾ ಹೊರಟ.

ಮುಂದಕ್ಕೆ ಹೋಗಲಾಗಿ ಒಂದು ಹಳ್ಳದಲ್ಲಿ ೮-೧೦ ಚಕ್ಕಡಿಗಳು ಉಸುಕಿನಲ್ಲಿ **ಹೋ**ಗದೇ ನಿಂತಿದ್ದವು. ಅಳಿಯನು ಅಲ್ಲಿ ಹೋಗಿ "ಒಂದರ ಹಿಂದೊಂದು ಹೀಗೆಯೇ ಸಿಗಲಿ" ಎಂದನು.

ಚಕ್ಕಡಿಯವರು ಸಿಟ್ಟಿಗೆದ್ದು ಇವನನ್ನು ಹೊಡೆದರು. "ಹಾಗಾದರೆ ಏನೆನ್ನಬೇಕು?" ಎಂದು ಅಳಿಯನು

ಇಲ್ಲಿಯೂ ಕೇಳಿದನು. ಅವರು "ಒಂದರ ಹಿಂದೊಂದು ಚಕ್ಕಡಿಗಳು ಹೀಗೆಯೇ ಉಸುಕುಬಿಟ್ಟು ಹೋಗಲಿ ಎನ್ನು" ಎಂದರು. ಅಳಿಯನಿಗೆ ಇದು ಸರಿಕಾಣಲಿಲ್ಲ. ಅವನು "ಒಂದರ ಹಿಂದೊಂದು ಹೀಗೆಯೇ ಹೋಗಲಿ" ಎನ್ನುತ್ತಾ ಹೊರಟ.

ಹಾದಿಯಲ್ಲಿ ಮತ್ತೊಂದು ಹಳ್ಳಿಯಲ್ಲಿ ಒಬ್ಬ ಮದುಮಗನು ಸತ್ತಿದ್ದನು. ಅಲ್ಲಿ ಹೋಗಿ ಅಳಿಯನು "ಒಂದರ ಹಿಂದೊಂದು ಹೀಗೆಯೆ ಹೋಗಲಿ" ಎಂದನು. ಅಲ್ಲಿ ನೆರೆದವರೂ ಇವನಿಗೆ ಸಿಟ್ಟುಮಾಡಿದರು. "ಹಾಗಾದರೆ ಏನನ್ನಲಿ" ಎಂದು ಕೇಳಿದನು. ಅದಕ್ಕೆ ಅವರು "ಒಂದರ ಹಿಂದೊಂದು ಮದುವೆಗಳು ಹೀಗೆಯೇ ಹತ್ತಲಿ ಅನ್ನುತ್ತಾ ಹೊರಡು" ಎಂದರು. ಅಳಿಯನಿಗೆ ಇದೂ ದೊಡ್ಡ ವಾಕ್ಯವಾಯಿತು. ಅವನು "ಒಂದರ ಹಿಂದೊಂದು ಹೀಗೆಯೇ ಹತ್ತಲಿ" ಇಷ್ಟೇ ಅನ್ನುತ್ತಾ ಹೊರಟ. ಅಂತೂ ಹೀಗೆ ಅನ್ನುತ್ತಾ ತನ್ನ ಅತ್ತೆಯ ಊರು ಮುಟ್ಟಿದ. ಅಲ್ಲಿ ಒಂದು ಬಣವಿಗೆ ಬೆಂಕಿ ಹತ್ತಿತ್ತು. ಅಳಿಯನು ಅಲ್ಲಿ ಹೋಗಿ "ಒಂದರ ಹಿಂದೊಂದು ಹೀಗೇ ಹತ್ತಲಿ" ಎಂದನು. ಅಲ್ಲಿಯವರು ಇವನನ್ನು ಚಂಡುಹಿಡಿದು ನೂಕಿದರು. ಅಲ್ಲಿಯೂ ತನ್ನ ಪ್ರಶ್ನೆಯನ್ನು ಕೇಳದೇ ಬಿಡಲಿಲ್ಲ. ಅವರು ಏನೂ ಅನ್ನಬೇಡಾ ಮನೆಗೆ ಹೋಗು" ಎಂದರು.

ಹಾಗೇ ಅನ್ನುತ್ತಾ ಅತ್ತೆಯ ಮನೆ ಸೇರಿ ಅಲ್ಲಿ ಕೆಲವು ದಿವಸ ಬಹಳ ನಾಜೂಕದಿಂದಿದ್ದು ತಿರುಗಿ ತನ್ನ ಮನೆಗೆ ಹೋಗಿ ಸುಖಿಯಾಗಿದ್ದನು.



## ಆಚಾರಿ ಮತ್ತು ಅನಾಚಾರಿ

ಹಣಮಂತಾಚಾರ್ಯರ ದಿನದ ಕೆಲಸವೆಂದರೆ:- ಮುಂಜಾನೆ ಎದ್ದು ನದಿಯಲ್ಲಿ ಸ್ನಾನಮಾಡಿ ಬರುವದು. ಬರುವಮುಂದೆ ತೋಟವಲ್ಲಿ ತುಳಸಿ, ಪತ್ರಿ, ಹೂವು ತಂದು ದೇವರ ಪೂಜೆ ಮಾಡುವದು. ಆ ಮೇಲೆ ಅಡಿಗೆ ಯಾಗುವವರೆಗೆ ಜನಿವಾರದ ದಾರ ನೂಲುವದು. ಆ ಮೇಲೆ ಊಟ. ಸಂಜೆಯ ಮುಂದೆ ಪೇಟೆಯ ಕಡೆಗೆ ಹೋಗಿ ಏನಾದರೂ ಕಾಯಿಪಲ್ಯ ತರುವರು.

ಅವರಿಗೆ ರಾಮಾಚಾರಿಯೆಂಬ ಎಂಟು ವರ್ಷದ ಮಗು ಇದೆ. ಪ್ಲೇಗಿನಿಂದ ರಾಮಾಚಾರಿಯ ತಾಯಿ (ಹಣಮಂತಾಚಾರ್ಯರ ಹೆಂಡತಿ) ಸತ್ತಳು. ಮಗು ರಾಮಾಚಾರಿ ಪರದೇಶಿಯಾದನು.

ಬರಬರುತ್ತ ರಾಮಾಚಾರಿಯು ಹುಚ್ಚನಹಾಗೆ ಮಾಡಲಿಕ್ಕೆ ಹತ್ತಿದನು. ಹನ್ನೆರಡು ಹದಿಮೂರು ವರ್ಷದವನಾದ ಬಳಿಕ ಪೂರ್ಣ ಹುಚ್ಚೇ ಹಿಡಿದುಬಿಟ್ಟಿತು.

ಒಂದು ದಿನ ಹಣಮಂತಾಚಾರ್ಯರು ಪರಹಳ್ಳಿಗೆ ಹೋಗಿ ಲಾವಣಿ ವಸೂಲ ಮಾಡಿಕೊಂಡು ಬರಬೇಕೆಂದು ಹೊರಟರು. ಅವರು ಹೋಗುವಾಗ ಮಗನನ್ನು ಕರೆದು "ರಾಮ್ಯಾ, ನೆಲುವಿನ ಮೇಲೆ ಬೆಲ್ಲ ಅದ. ಒಲೆಯ ಮೇಲೆ ಚಪಾತಿ ಅವ, ಕಪಾಟಿನಾಗ ತುಪ್ಪ ಅದ. ಈವತ್ತ ನಾಲ್ಕು ಶೇರು ಬೆಣ್ಣೆ ತಗೊಂಡು ಕಾಸಿ ಇಟ್ಟೇನಿ, ಚಲ್ಲೀ–ಎಚ್ಚರಿಕೆ" ಎಂದು ಹೇಳಿ ಹೊರಟರು.

ಅವರು ಮರೆಯಾದುದೊಂದೇ ತಡ, ರಾಮಾಚಾರಿಯು ಅಡಿಗೆಯ ಮನೆಗೆ ಹೋದವನೇ ನಾಲ್ಕು ಚಪಾತಿ ಹಿಡಕೊಂಡು ೧ ಸೇರಿನಷ್ಟು ಬೆಲ್ಲ ಹಾಕಿಕೊಂಡ. ಕಪಾಟು ತೆಗೆದು, ತುಪ್ಪದ ಕೊಳಗಕ್ಕೆ "ತುಪ್ಪ ಹಾಕು" ಎಂದನು. ಪಾಪ ಅದೇನು ಹಾಕಬಲ್ಲದು! ಮತ್ತೆ "ಹಾಕತೀಯೇನ ಇಲ್ಲೋ, ನೋಡ ಹಿಂದುಗಡೆ ಪರಿಣಾಮ ಸೆಟ್ಟಗಾಗಲಿಕ್ಕಿಲ್ಲ" ಎಂದನು. ಅದು ಮತ್ತೂ ಹಾಕಲಿಲ್ಲ. ಒಳ್ಳೆ ಮೇಲಿಟ್ಟ ಹಾರಿಯನ್ನು ತಂದವನೇ ಅದಕ್ಕೆ ಒಂದು ಬಲವಾದ ಏಟು ಕೊಟ್ಟ. ಕೊಳಗ ಉಳ್ಳಿಬಿಟ್ಟಿತು. ಕಪಾಟಿನೊಳಗಿಂದ ತುಪ್ಪವು ಬೀಳಹತ್ತಿತು. ಅದರ ಬುಡಕ್ಕೆ ರಾಮಾಚಾರಿಯು ಚಪಾತಿಯನ್ನು ಒಡ್ಡಿದ. ತುಪ್ಪ ಚಪಾತಿ ತುಂಬ ಆದಮೇಲೆ "ಸಾಕು ಬಿಡು ಮಸ್ತಾತು" ಎಂದ. ಅದು ಬಿಡಲಿಲ್ಲ "ಯಾಕ! ಬಿಡತೀಯಿಲ್ಲೋ"

ಎಂದ. ಅದು ಇನ್ನೂ ಸೋರುತ್ತಲೇ ಇತ್ತು. ಮತ್ತೆ ಹಾರಿಯಿಂದ ಒಂದು ಕಪಾಟಿಗೇ ಹೊಡೆದ. ಕಪಾಟಿನ ಖಾನೆ ಮುರಿಯಿತು. ತುಪ್ಪವು ಕಪಾಟಿನ ಬುಡಕ್ಕೆಲ್ಲಾ ಸೋರಿಬಿಟ್ಟಿತು. ಆಗ ರಾಮಾಚಾರಿಯು ಸಿಟ್ಟಿಗೆದ್ದು ಚಪಾತಿಯನ್ನೂ ಅಲ್ಲೇ ಒಗೆದು ಒಂದು ಮೂಲೆಯಲ್ಲಿ ಸೆಟಗೊಂಡು ಕುಳಿತುಬಿಟ್ಟನು.

ಸಂಜೆಗೆ ಹಣಮಂತಾಚಾರ್ಯರು ಮನೆಗೆ ಬಂದು, ರಾಮಾಚಾರಿಯನ್ನು ಕುರಿತು "ಯಾಕೋ ರಾಮ್ಯಾ, ದೀಪಾ ಯಾಕ ಹಚ್ಚಿಲ್ಲ?" ಎಂದರು. ರಾಮಾಚಾರಿಯು ಮಾತಾಡಲಿಲ್ಲ. ಆಗ ಕತ್ತಲೆಯಲ್ಲಿ ರಾಮಾಚಾರಿಯು ಮೂಲೆಯಲ್ಲಿ ಸೆಟಗೊಂಡು ಕುಳಿತದ್ದು ಅವರಿಗೆ ಕಾಣಲಿಲ್ಲ. ಆಗ ಅವರು "ನೀಚ! ಬಾಗಿಲ ತೆಗೆದು ಹೊರಗೆ ಹೋಗಿರುವನಲ್ಲ. ನಾಯಿ ಹೊಕ್ಕಿದ್ದರೆ-?" ಎಂದು ದೀಪ ಹಚ್ಚಿ ಪಡಸಾಲೆಗೆ ಬಂದರು. ಅಲ್ಲಿ ರಾಮಾಚಾರಿಯು ಬಿದ್ದುಕೊಂಡಿದ್ದ. ಅವರು ರಾಮಾಚಾರಿಯನ್ನು ಎಬ್ಬಿಸಿದರು. ಮತ್ತೆ ಸಂಜೆಯ ಅಡಿಗೆ ಮಾಡುವದಕ್ಕೆ ಅಡಿಗೆಮನೆ ಹೊಕ್ಕರು. ದೃಷ್ಟಿಯು ಕಪಾಟಿನ ಕಡೆಗೆ **ಹೋಯಿತು.** ಸಿಟ್ಟಿನಿಂದ ಹಲ್ಲುಕಟೆಯುತ್ತ "ಅಯ್ಯೋ, ರಾಮ್ಯಾ,-ಘನ ಅನಾಹುತೋ? ಎಲ್ಲ ತುಪ್ಪ ಹಾಳು ಮಾಡಿಬಿಟ್ಟೆ. ಮನೆಯಲ್ಲಾ ಮುಸುರಿ. ಆ ಫಕ್ಕೀರನು ಲಾವಣಿ ಹಣ ಕೊಡ

ಲಿಲ್ಲ. ನಾಳಿಗೆ ತುಪ್ಪ ಎಲ್ಲಿಂದ ತರಲಿ?" ಎಂದವರೇ ಮಗ ನನ್ನು ಬಯ್ದು ಮನೆಯ ಹೊರಗೆ ಅಟ್ಟಿದರು.

ರಾಮಾಚಾರಿಯು ತಿರುಗಿ ಮನೆಗೆ ಬರದೆ ಹಾದಿ ಯಲ್ಲಿ ಸಿಕ್ಕ ಸಿಕ್ಕದ್ದನ್ನು ತಿನ್ನುತ್ತ ಜೀವಿಸಿದ್ದ. ಅಲ್ಲಿಯೇ ಸಮೀಪದಲ್ಲಿ ಸಂತೆಯಾಗುತ್ತಿತ್ತು. ಹಾದಿಯಲ್ಲಿ ರಾಮಾ ಚಾರಿಯು ಮಾವಿನತೊಪ್ಪಲನ್ನು ತಿನ್ನುತ್ತಾ ನಿಂತಿದ್ದ. ಆಗ ಅದೇ ಊರಿನ ಒಬ್ಬ ಸಂತೆಯವಳು ಆ ಮಾರ್ಗವಾಗಿ ಹೋಗುತ್ತಿರುವಾಗ ರಾಮಾಚಾರಿಯನ್ನು ಕಂಡು "ಏನೋ ರಾಮಣ್ಣಾ, ಹೀಂಗೆಲ್ಲಾ ಮಾಡಬಾರದು. ಸಂತೆಯವರನ್ನು ಬಡಿದು ಅವರಲ್ಲಿದ್ದ ಹಣ್ಣು-ಹಂಪಲಗಳನ್ನು ತಿನ್ನಬೇಕು" ಎಂದು ಉಪದೇಶ ಮಾಡಿದಳು. ಆಗ ರಾಮಾಚಾರಿಯು ಆಕೆಯನ್ನೇ ಬಡಿದು ಆಕೆಯಲ್ಲಿದ್ದ ಹಣ್ಣನ್ನು ತಿಂದು ತೇಗಿದನು.

ಒಂದು ದಿನ ರಾಮಾಚಾರಿಗೆ ಒಬ್ಬ ಕಳ್ಳನು ಭೆಟ್ಟಿ ಯಾದನು. ಆಗ ಕಳ್ಳನು ಇವನನ್ನು ಕರಕೊಂಡು ಒಬ್ಬ ದೊಡ್ಡ ಸಾವುಕಾರನ ಮನೆಗೆ ಕನ್ನ ಹಾಕಿದನು. ಆಗ ಕಳ್ಳನು ದುಡ್ಡನ್ನು ಹುಡುಕಹತ್ತಿದನು. ರಾಮಾಚಾರಿಯು ಒಲೆಗೆ ಹೋಗಿ ಉಡಿಯಲ್ಲಿ ಬೂದಿಯನ್ನು ಕಟ್ಟಿಕೊಂಡು ಹೊರಗೆ ಬಂದು "ಎಲ್ಲಾರೂ, ಕಣ್ಣು ಮುಚ್ಕೊಳ್ಳಿರಿ,

ಕಂಣಲ್ಲಿ ಬೂದಿ ಬಿದ್ದರ ಗೊತ್ತಿಲ್ಲ' ಎಂದು ಒತ್ತಿ ಒದರಿದನು. ಕಳ್ಳನು ಓಡಿಹೋದನು. ಮನೆಯವರು ಎದ್ದು ರಾಮಾಚಾರಿಯನ್ನು ಹಿಡಿದು ಕಂಬಕ್ಕೆ ಕಟ್ಟಿ ಹೊಡೆದು ಬಡೆದು ಕೇಳಿದರು. ಹುಚ್ಚನೆಂದು ತಿಳಿದು ಬಿಟ್ಟುಬಿಟ್ಟರು. ರಾಮಾಚಾರಿಯು ಮತ್ತೆ ಕಳ್ಳನನ್ನು ಕೂಡಿದನು. 'ಏನೋ ರಾಮಂಣಾ ಹೀಗೇಕೆ ಮಾಡಿದೆ?' ಎಂದನು. ಮತ್ತೆ ಅವರು ಮತ್ತೊಬ್ಬರ ಮನೆಗೆ ಕನ್ನಹಾಕಿ ಬಹಳ ದುಡ್ಡನ್ನು ಕದ್ದೊಯ್ದರು. ಅವರು ಒಂದು ಹಾಳು ದೇಗುಲದಲ್ಲಿ ಕುಳಿತುಕೊಂಡು ರೊಕ್ಕ ಎಣಿಸುತ್ತಿದ್ದರು. ಆಗ ರಾಮಾಚಾರಿಯು ಸಾಹುಕಾರನ ಮನೆಯಲ್ಲಿ ಒಂದು ಕಡ್ಡಿಪೆಟ್ಟಿಗೆ ತುಡುಗು ಮಾಡಿಕೊಂಡು ಬಂದಿದ್ದನು. ಆಗ ರಾಮಾಚಾರಿಯು ಮೋಜಿಗೋಸುಗವೆಂದು ಕಡ್ಡಿ ಕೆರೆದು ಕಳ್ಳನ ಮೇಲೆ ಒಗೆದನು. ಅವನ ಮೈಗೆ ಬೆಂಕಿ ಹತ್ತಿ ಅವನು ಓಡಿಹೋಗಿ ಅಲ್ಲಿಯೇ ಇದ್ದ ಹಾಳು ಭಾವಿ ಬಿದ್ದನು. ರಾಮಾಚಾರಿಯು "ಹಣದ ರಾಶಿಯ ಕಡೆಗೆ ನೋಡುತ್ತ ನನ್ನನ್ನು ಬಿಟ್ಟು ಹೋಗಬೇಡ ನಾನೂ ಬರುವೆ ನಿಲ್ಲು" ಎಂದು ಅವನು ಭಾವಿಯ ಕಡೆಗೆ ಹೋದನು.



## ನಸುಕಿನಲ್ಲಿ

ನಾನಿರುವದು ಧಾರವಾಡದಲ್ಲಿ. ಧಾರವಾಡದಲ್ಲಿ ಮಂಗಳವಾರ ಮುಂಜಾನೆ ಶಾಲೆ. ಯಾಕೆಂದರೆ ಆ ದಿವಸ ಇಲ್ಲಿಯ ಸಂತೆ.

ಅಂದು ಸೋಮವಾರ ರಾತ್ರಿ. ಮರುದಿನ ಮಾಸ್ತರರು ಭೂಗೋಲು ಕೇಳುವೆನೆಂದು ಹೇಳಿದ್ದರು. ನಮ್ಮ ಭೂಗೋಲ ಮಾಸ್ತರರು ಬಹಳ ಸಿಟ್ಟಿನವರು. ಅವರ ಪ್ರಶ್ನೆಗೆ ತಪ್ಪಬಾರದು, ಅಷ್ಟೇ.

ಅದಕ್ಕಾಗಿ ನಾನು ಬೆಳಗು ಮುಂಜಾನೆ ನಾಲ್ಕಕ್ಕೆ ಅಥವಾ ಐದಕ್ಕೆ ಎದ್ದು ಓದಬೇಕೆಂದು ನಿಶ್ಚಯಿಸಿದೆ. ನಾನೂ ಬಹಳ ನಿದ್ದಿಬಡಕ. ಒಮ್ಮೆ ಮಲಗಿದೆನೆಂದರೆ ಏಳುವದು ಯಾವಾಗೋ ಏನೋ! ಅಂತೂ ಆ ದಿವಸ ತಾಯಿಗೆ "ಲಗೂನೆ ಎಬ್ಬಿಸು" ಎಂದು ಹೇಳಿ ಮಲಗಿಕೊಂಡೆ.

ಬೆಳಗಿನ ಜಾವ. ಐದು ಗಂಟೆಯ ಸಮಯ. ಒಳಗೆ ತಾಯಿಯು "ಏಳು" ಎಂದು ಕೂಗುತ್ತಿದ್ದಾಳೆ. ನನಗೆ ಆಗ ಬಹಳ ಚಳಿಯಾಗುತ್ತಿತ್ತು. ನಾಲ್ಕೈದು ಹೊದ್ದುಕೊಂಡು ಬಿದ್ದಿದ್ದೆ. ಒಳ್ಳೆ ಸಂಪು ನಿದ್ದೆ ಹತ್ತಿತ್ತು. ಏಳುವದಾಗಲಿಲ್ಲ. ಏಳದಿದ್ದರೆ ತಂದೆಯವರು ಚೆನ್ನಾಗಿ ಥಳಿಸುವರು. ಅಂತೂ ಎದ್ದು ಕುಳಿತೆ. ಅತಿಶಯ ಚಳಿಯೆನಿಸ

ಹತ್ತಿತು. ಪುಸ್ತಕ ತೆಗೆದೆ. ಒಂದು ಪಾನು ಓದುವದರೊಳಗೆ ಕಣ್ಣು ಉರಿಯಲಿಕ್ಕೆಹತ್ತಿದವು. ಮಲಗಿಕೊಂಡು ಓದ ಹತ್ತಿದೆ. ಅಲ್ಲಿಯೇ ನಿದ್ದೆ ಹತ್ತಿಬಿಟ್ಟಿತು. ಎದೆಯ ಮೇಲೆ ಇಟ್ಟು ಓದುತ್ತಿದ್ದ ಪುಸ್ತಕವು ಅಲ್ಲಿಯೇ ಇದೆ.

ಮತ್ತೆ ಒಳಗೆ ತಾಯಿಯ ಕೂಗು. ಆಗಲೇ ಗಂಟೆ ಏಳಾಗಿದೆ. ಗಡಿಯಾಳವನ್ನು ಮುರಿದೊಗೆಯಲೇ ಎನಿಸಿತು. ಶಾಲೆ ಏಳೂವರೆಗೆ ಸುರುವು. ಆದರೂ ಏಳಲಾರದೆ ಬಿದ್ದಿದ್ದೆ. ಹೊರಗೆ ತಂದೆಯವರು "ಏಳತೀಯೋ ಇಲ್ಲೊ? ಏನು ಬೇಕೋ?" ಎಂದರು. ಚಟಕ್ಕನೆ ಎದ್ದೆ. ಏಳುವಾಗ ಗೋಣು "ಲಳಕ್" ಎಂದಿತು. ಹಾಸಿಗೆ ಸುತ್ತಿ ಇಟ್ಟು ಬಚ್ಚಲಮನೆಗೆ ಓಡಿದೆ. ಅಲ್ಲಿ ಬಿಸಿನೀರೇ ಇದ್ದಿಲ್ಲ. ನನ್ನ ದುರ್ದೈವ. ತಣ್ಣೀರಿನಿಂದಲೇ ಮೋರೆ ತೊಳೆದುಕೊಂಡೆ. ಆ ದಿವಸ ಚಹಾಪುಡಿ ಇದ್ದಿಲ್ಲ. ಅಂತೂ ಆ ದಿವಸ ಚಹಾ ಸಿಗಲಿಲ್ಲ. ಚಹಾಕುಡಿದಿದ್ದರೆ ಎಷ್ಟೋ ಆರಾಮವಿರುತ್ತಿತ್ತು ಮನಸ್ಸು. ಹಾಗೇ ಕೋಟು ಟೊಪ್ಪಿಗೆ ಹಾಕಿಕೊಂಡು ಶಾಲೆಯ ಹಾದೀ ಹಿಡಿದೆ. ಹೋಗುವಾಗ ಬೂಟು ಹಾಕಿಕೊಳ್ಳುವದೇ ಮರೆತೆ. ಯಾಕಂದರೆ ಚಹಾ ಸಿಗದ್ದರಿಂದ ಮನಸ್ಸಿನಲ್ಲಿ ಏನೋ ಗದ್ದಲವೇ ನಡೆದಿದ್ದಿತು. ಕಾಲ್ಲಿ ಬೂಟು ಇಲ್ಲದ್ದರಿಂದ ಕಾಲಿಗೆ ಹರಳುಗಳು ಸೂಜಿ ಚುಚ್ಚಿದ ಹಾಗೆ ಚುಚ್ಚುತ್ತಿದ್ದವು. ಮತ್ತೆಲ್ಲಿ ತಿರುಗಿ ಮನೆಗೆ

ಹೋಗುವದು ಎಂದು ಬಿಟ್ಟೆ. ಹಾದಿಯಲ್ಲಿ ಹೊಲೆಯರ ದೊಂದು ಕಾಟ. ನಾನು ಹೋಗುವ ಹೊತ್ತಿಗೇ ಕಸಾ ಉಡುಗಿ ಧೂಳಿ ಎಬ್ಬಿಸಬೇಕಾದರೆ? ಧೂಳಿ ಕಣ್ಣಲ್ಲಿ ಮೂಗಿನಲ್ಲಿ ಹೊಕ್ಕು ಉಸಿರು ಸಿಕ್ಕಿತು. ಮನೆಯಿಂದ ಶಾಲೆಯು ಒಂದೂವರೆ ಮೈಲಿನಷ್ಟಿದೆ. ಹೀಗೇ ಅನೇಕ ಕಷ್ಟ ಗಳನ್ನನುಭವಿಸುತ್ತ "ಟಾವರ ಕ್ಲಾಕ್"ಗೆ ಬಂದೆ. ಏಳೂ ವರೆಯಾಗಿ ಏಳೂವರೆ ಮಿನೀಟುಗಳಾಗಿದ್ದವು. ಶಾಲೆ ಇನ್ನೂ ಕೊಂಚ ದೂರೇ! ಆದಷ್ಟು ಜೋರು ನಡೆಯ ಬೇಕೆಂದೆ. ಆಗಲಿಲ್ಲ. ಮತ್ತೆ ಮೊದಲಿನಂತೆಯೇ. ಅಂತೂ ಶಾಲೆಯನ್ನು ಮುಟ್ಟಿದೆ. ಮಾಸ್ತರರು ಬಂದು ಭೂಗೋಲು ಕೇಳಲಿಕ್ಕೆ ಹತ್ತಿದ್ದರು. ಅವರ ಪರವಾನಿಗೆ ತೆಗೆದುಕೊಂಡು ಒಳಗೆ ಹೋದೆ. ಅವರು ತಡವಾದುದಕ್ಕೆ ಒಂದು ಏಟು ಕೊಟ್ಟರು ಕೆನ್ನೆಗೆ. ಜಾಗೆಯ ಮೇಲೆ ಹೋಗಿ ಪೆಚ್ಚು ಮೋರೆ ಮಾಡಿಕೊಂಡು ಕುಳಿತೆ. ಅಭ್ಯಾಸದ ಕಡೆಗೆ ಲಕ್ಷ್ಯವೇ ಇಲ್ಲ. ಮಾಸ್ತರರು ಒಂದು ಪ್ರಶ್ನೆ ಹಾಕಿದರು. ನನ್ನ ಲಕ್ಷ್ಯವೇ ಇರಲಿಲ್ಲ. ಅದಕ್ಕೊಂದು ಏಟುಬಿತ್ತು. ಮತ್ತು ಆ ಪ್ರಶ್ನೆಗೆ ಉತ್ತರ ತಪ್ಪಿದೆ. ಅದಕ್ಕೊಂದು ಏಟು. ಅಯ್ಯೋ! ಯಾರ ಮುಂದೆ ಹೇಳಲಿ ನನ್ನ ದುಃಖ! ಯಾವ ಮಾರಾಯನು ಮುಂಜಾನೆ ಶಾಲೆಯನ್ನು ಇಟ್ಟಿದ್ದಾನಪ್ಪ ಎಂದೆ.

———